# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | | 08 (291) |
| ಸದಸ್ಯರ ಹೆಸರು | | ಶ್ರೀ ಅರುಣ ಶಹಾಪುರ (ಶಿಕ್ಷಕರ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | | **13.09.2021** |
| ಉತ್ತರಿಸಬೇಕಾದ ಸಚಿವರು | | ಮಾನ್ಯ ಉನ್ನತ ಶಿಕ್ಷಣ ಸಚಿವರು. |
| **ಪ್ರಶ್ನೆ** | | **ಉತ್ತರ** |
| ಅ) | ಅನುದಾನಿತ ಪದವಿ ಕಾಲೇಜುಗಳಲ್ಲಿ ಕಾರ್ಯನಿರ್ವಹಿಸುತ್ತಿರುವಾಗಲೇ ಮರಣ ಹೊಂದಿದ ಸಂದರ್ಭದಲ್ಲಿ ಅವರ ಕುಟುಂಬಸ್ಥರಿಗೆ ಅನುಕಂಪದ ಹುದ್ದೆಯನ್ನು ಕೊಡುವ ಬಗ್ಗೆ ಪ್ರಸಕ್ತ ಇರುವ ನಿಯಮ ಮತ್ತು ಅವಕಾಶಗಳೇನು; ಈ ಹಿಂದೆ ಅನುಕಂಪದ ಹುದ್ದೆಗಳನ್ನು ನೀಡಲಾಗಿತ್ತೇ; ಆಗಿನ ನಿಯಮಾವಳಿಗಳೇನು; (ವಿವರ ನೀಡುವುದು) | ಸರ್ಕಾರದ ಪತ್ರ ಸಂಖ್ಯೆ: ಇಡಿ/246/ಯುಪಿಸಿ/2001, ದಿ:01.02.2002 ರಲ್ಲಿ ಖಾಸಗಿ ಅನುದಾನಿತ ಶಿಕ್ಷಣ ಸಂಸ್ಥೆಗಳಲ್ಲಿ ಸೇವೆಯಲ್ಲಿದ್ದಾಗಲೇ ಮರಣ ಹೊಂದಿದ ನೌಕರರ ಅವಲಂಬಿತರಿಗೆ ಅನುಕಂಪದ ಆಧಾರದ ಮೇಲೆ ನೇಮಕಾತಿ ಮಾಡಲು ಅವಕಾಶವಿಲ್ಲವೆಂದು ತಿಳಿಸಲಾಗಿರುತ್ತದೆ. ಅಲ್ಲದೆ ಸರ್ಕಾರದ ಅಧಿಸೂಚನೆ ಸಂಖ್ಯೆ: ಇಡಿ/551/ಯುಪಿಸಿ/99, ದಿನಾಂಕ:07.08.2003 ರಲ್ಲಿ ಹೊರಡಿಸಿರುವ ಕರ್ನಾಟಕ ಶಿಕ್ಷಣ ಸಂಸ್ಥೆಗಳು (ಕಾಲೇಜು ಶಿಕ್ಷಣ) ನಿಯಮಗಳು-2003 ರ ನಿಯಮ 08 (02) ರಲ್ಲಿ "Vacant and unapproved post Non-teaching staff as on 01.03.2001 shall be permanently unaided. Any vacancies in the Non-teaching posts which as arisen after 01.03.2001 on account of retirement, resignation, removal, dismissal and death etc., are to remain permanently unaided. Such vacancies which are unaided shall be filled by the management and salary and other allowances shall be paid from its own resources ಎಂದು ತಿಳಿಸಲಾಗಿರುತ್ತದೆ.<br><br>ಕಾಲೇಜು ಶಿಕ್ಷಣ ಇಲಾಖೆಯಲ್ಲಿ ಸ್ವೀಕೃತಗೊಂಡಿದ್ದ ಅನುಕಂಪದ ಆಧಾರದ ನೇಮಕಾತಿ ಪ್ರಕರಣಗಳ ಕ್ರೋಢೀಕೃತ ಮಾಹಿತಿಗೆ ಸಂಬಂಧಿಸಿದಂತೆ ಸರ್ಕಾರದ ಪತ್ರ ಸಂಖ್ಯೆ: ಇಡಿ/159/ಯುಪಿಸಿ/2015, ದಿನಾಂಕ: 06.06.2019 ರಲ್ಲಿ ಖಾಸಗಿ ಅನುದಾನಿತ ಪದವಿ ಕಾಲೇಜುಗಳಲ್ಲಿ ದಿನಾಂಕ: 01.03.2001 ರ ನಂತರ ತೆರವಾಗಿರುವ ಬೋಧಕೇತರ ಹುದ್ದೆಗಳು ಶಾಶ್ವತವಾಗಿ ಅನುದಾನ ರಹಿತವೆಂದು ಪರಿಗಣಿಸಿರುವುದರಿಂದ, ಖಾಸಗಿ ಅನುದಾನಿತ ಪದವಿ ಕಾಲೇಜುಗಳಲ್ಲಿ ಅನುಕಂಪದ ಆಧಾರದ ಮೇಲೆ ನೇಮಕಾತಿ ಮಾಡಲು ನಿಯಮಗಳಲ್ಲಿ ಅವಕಾಶವಿರುವುದಿಲ್ಲ. |

| | | |
|---|---|---|
| | | ಈ ಹಿಂದೆ ಸರ್ಕಾರದ ಆದೇಶ ಸಂಖ್ಯೆ: ಇಡಿ/98/ಎಸ್‌ಟಿಬಿ/1996, ದಿನಾಂಕ:21.11.1996 ರನ್ವಯ ಅನುದಾನಿತ ಶಿಕ್ಷಣ ಸಂಸ್ಥೆಗಳಲ್ಲಿ ಸೇವೆಯಲ್ಲಿದ್ದಾಗ ಮೃತರಾಗುವ ನೌಕರರ ಅವಲಂಬಿತರಿಗೆ ಮಂಜೂರಾದ ಹುದ್ದೆಗಳಲ್ಲಿ ಅನುಕಂಪದ ಆಧಾರದ ಮೇಲೆ ನೇಮಕಾತಿ ನೀಡಲು ಅವಕಾಶ ಕಲ್ಪಿಸಲಾಗಿತ್ತು. ಆದರೆ ಈ ಉದ್ದೇಶಕ್ಕಾಗಿ ಹೊಸ ಹುದ್ದೆಗಳನ್ನು ಯಾವುದೇ ವೃಂದದಲ್ಲಿ ಸೃಜಿಸುವ ಅವಕಾಶವನ್ನು ನಿರಾಕರಿಸಲಾಗಿತ್ತು. |
| ಆ) | ಸರ್ಕಾರದ ಇತರೆ ಇಲಾಖೆಗಳಲ್ಲಿ ಅನುಕಂಪದ ಆಧಾರದ ಮೇಲೆ ಉದ್ಯೋಗ ನೀಡುವ ನಿಯಮವಿದ್ದು, ಅನುದಾನಿತ ಪದವಿ ಕಾಲೇಜುಗಳಲ್ಲಿ ಮಾತ್ರ ಅವಕಾಶ ಇಲ್ಲದಿರುವುದು ಕಾರಣವೇನು; ಈ ಅನುದಾನಿತ ಪದವಿ ಕಾಲೇಜುಗಳಲ್ಲಿ ಅನುಕಂಪದ ಹುದ್ದೆಯನ್ನು ನೀಡುವ ಕುರಿತು ಸರ್ಕಾರದ ಸ್ಪಷ್ಟ ನಿಲುವೇನು: ಯಾವ ಕಾಲಮಿತಿಯ ಒಳಗೆ ಹುದ್ದೆ ಭರ್ತಿ ಮಾಡಲು ಕ್ರಮ ಕೈಗೊಳ್ಳಲಾಗುವುದು? | ಉದ್ಭವಿಸುವುದಿಲ್ಲ. |

**ಇಡಿ 24 ಯುಜಿಹೆಚ್ 2021**

(ಡಾ: ಅಶ್ವಥ್ ನಾರಾಯಣ ಸಿ.ಎನ್)
ಉನ್ನತ ಶಿಕ್ಷಣ ಸಚಿವರು.